

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1174 (1437) |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 23/09/2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕರ ಕಲ್ಯಾಣಕ್ಕಾಗಿ ಸರ್ಕಾರವು ರೂಪಿಸಿರುವ ಕಾರ್ಯ ಕ್ರಮಗಳೇನು; (ಮಾಹಿತಿ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ನೋಂದಾಯಿತರಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ 19 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ. ವಿವರಗಳನ್ನು <u>**ಅನುಬಂಧ-1**</u> ರಲ್ಲಿ ಲಗತ್ತಿಸಿದೆ.<br><br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>(1) <u>**ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**</u> ಸಾರಿಗೆ ಇಲಾಖೆಯಿಂದ ನೀಡುವ ಊರ್ಜಿತಾ ಖಾಸಗಿ ವಾಣಿಜ್ಯ ವಾಹನ ಚಾಲನಾ ಪರವಾನಗಿ ಹೊಂದಿದ ಎಲ್ಲಾ ಚಾಲಕರನ್ನು ಯೋಜನೆಯಡಿ ಫಲಾನುಭವಿಗಳೆಂದು ಪರಿಗಣಿಸಲಾಗಿದ್ದು, ಅವರಿಗೆ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>(ಅ) **ಅಪಘಾತ ಪರಿಹಾರ ಸೌಲಭ್ಯ :** ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದವರಿಗೆ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ. |

(ಆ) **ಶೈಕ್ಷಣಿಕ ಧನ ಸಹಾಯ** : ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

(ಇ) **ಅಪಘಾತ ಜೀವ ರಕ್ಷಕ:-** ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಜೀವರಕ್ಷಕರನ್ನಾಗಿಸುವ ಉದ್ದೇಶದಿಂದ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ. ಹಾಗೂ ತರಬೇತಿ ಪಡೆದ ಚಾಲಕರಿಗೆ ಪ್ರಥಮ ಚಿಕಿತ್ಸಾ ಕಿಟ್ ಹಾಗೂ ಪ್ರಮಾಣ ಪತ್ರ ನೀಡಲಾಗುವುದು.

(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**
ಈ ಯೋಜನೆಯಡಿ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.

(3) **ಕರ್ನಾಟಕ ರಾಜ್ಯ ಕಾರ್ಮಿಕರ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ (ಆಶಾದೀಪ ಯೋಜನೆ) ಸೊಸೈಟಿ:-** ಕರ್ನಾಟಕ ರಾಜ್ಯ ಸರ್ಕಾರವು, ಖಾಸಗಿ ವಲಯದ ಸಂಸ್ಥೆ/ಕಾರ್ಖಾನೆಗಳಲ್ಲಿ ಪ.ಜಾತಿ ಮತ್ತು ಪ.ಪಂಗಡದ ಅಭ್ಯರ್ಥಿಗಳ ನೇಮಕಾತಿಯನ್ನು ಉತ್ತೇಜಿಸಲು, "ಆಶಾದೀಪ ಯೋಜನೆ"ಯನ್ನು ಜಾರಿಗೆ ತಂದಿದ್ದು, ಸದರಿ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ:-

**ಅ) ಮಾಲೀಕರು ಪಾವತಿಸುವ ಇ.ಎಸ್.ಐ. ಮತ್ತು ಇ.ಪಿ.ಎಫ್. ವಂತಿಕೆ ಮರುಪಾವತಿ:-** ಖಾಸಗಿ ವಲಯದ ಸಂಸ್ಥೆಗಳಲ್ಲಿ ಹೊಸದಾಗಿ ನೇಮಿಸಿಕೊಳ್ಳುವ ಪ.ಜಾತಿ ಮತ್ತು ಪ.ಪಂಗಡದ ಉದ್ಯೋಗಿಗಳಿಗೆ ಮಾಲೀಕರು/ ಉದ್ಯೋಗದಾತರು ಕಡ್ಡಾಯವಾಗಿ ಪಾವತಿಸಿದ ಶಾಸನಬದ್ಧ ಭವಿಷ್ಯನಿಧಿ ಹಾಗೂ ಇ.ಎಸ್.ಐ. ವಂತಿಕೆಯನ್ನು ರಾಜ್ಯ ಸರ್ಕಾರದಿಂದ ಮಾಲೀಕರು/ ಉದ್ಯೋಗದಾತರಿಗೆ ಎರಡು ವರ್ಷಗಳ ಅವಧಿಯ ವರೆಗೆ ಮಾಸಿಕ ಗರಿಷ್ಠ ತಲಾ ರೂ.3000/-ಗಳ ಮಿತಿಯೊಳಗೆ ಮರುಪಾವತಿ.

ಆ) <u>ಅಪ್ರೆಂಟಿಸ್ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳ ಶಿಷ್ಯವೇತನ (**Stipend**) ಮರುಪಾವತಿ</u>:- ಒಂದು ವರ್ಷದ ಅವಧಿಯ ಸಾಮಾನ್ಯ (Normal) ಹಾಗೂ ಎರಡು ವರ್ಷಗಳ ಅವಧಿಯ ಸಮಗ್ರ (Comprehensive) ಅಪ್ರೆಂಟಿಸ್ ತರಬೇತಿ ಪಡೆಯುತ್ತಿರುವ ಪ.ಜಾತಿ ಮತ್ತು ಪ.ಪಂಗಡದ ಅಭ್ಯರ್ಥಿಗಳಿಗೆ ಅಪ್ರೆಂಟಿಸ್ ಕಾಯ್ದೆ, 1961 ರನ್ವಯ ಪಾವತಿಸಬೇಕಾದ ಮಾಸಿಕ ಶಿಷ್ಯವೇತನ (Stipend) ಮೊತ್ತದಲ್ಲಿ 2/3 ರಷ್ಟು ಮೊತ್ತವನ್ನು ಮಾಸಿಕ ತಲಾ ರೂ.5000/- ಗಳ ಮಿತಿಯೊಳಗೆ ಮರುಪಾವತಿ.

ಇ) <u>ಅಪ್ರೆಂಟಿಸ್ ನಂತರ ಖಾಯಂ ಮಾಡಿದಲ್ಲಿ ವೇತನ ಮರುಪಾವತಿ</u>:- ಅಪ್ರೆಂಟಿಸ್ ತರಬೇತಿ ಪಡೆದ ಪ.ಜಾತಿ ಮತ್ತು ಪ.ಪಂಗಡದ ಅಭ್ಯರ್ಥಿಗಳನ್ನೇ ಖಾಯಂ ಹುದ್ದೆಗಳಲ್ಲಿ ನೇಮಕಾತಿ ಮಾಡಿಕೊಂಡಲ್ಲಿ, ಅಂತಹ ನೌಕರರಿಗೆ ಆಯಾ ಹುದ್ದೆಗಳಿಗೆ ಸರ್ಕಾರ ನಿಗದಿಪಡಿಸಿದ ಕನಿಷ್ಠ ವೇತನ ದರದಲ್ಲಿ ಶೇ.50 ರಷ್ಟು ಮೊತ್ತವನ್ನು ಮಾಸಿಕ ಗರಿಷ್ಠ ತಲಾ ರೂ. 7000/-ಗಳ ಮಿತಿಯೊಳಗೆ ಉದ್ಯೋಗದಾತರಿಗೆ ಒಂದು ವರ್ಷದ ಅವಧಿಗೆ ಮರುಪಾವತಿ ಮಾಡಲಾಗುತ್ತದೆ.

<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-</u>

ಕಾರ್ಮಿಕರ ಇಲಾಖೆಯ ಅಧೀನದಲ್ಲಿರುವ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಿಂದ ಸಂಘಟಿತ ಕಾರ್ಮಿಕರ ಕಲ್ಯಾಣಕ್ಕಾಗಿ ಅನುಷ್ಠಾನಗೊಳಿಸಿರುವ ವಿವಿಧ ಯೋಜನೆಗಳು ಈ ಕೆಳಕಂಡಂತಿವೆ.

1) **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ**
2) **ಕಾರ್ಮಿಕರಿಗೆ ವೈದ್ಯಕೀಯ ನೆರವು**
3) **ಕಾರ್ಮಿಕರಿಗೆ ಅಪಘಾತ ಧನ ಸಹಾಯ**
4) **ಹೆರಿಗೆ ಭತ್ಯೆ ಸೌಲಭ್ಯ**
5) **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ**
6) **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ**
7) **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ**

ಕಾರ್ಮಿಕ ಕಲ್ಯಾಣ ಯೋಜನೆಗಳ ವಿವರಗಳನ್ನು ಅನುಬಂಧ-2 ರಲ್ಲಿ ಲಗತ್ತಿಸಿದೆ.

(4) <u>ಕಾರ್ಮಿಕ ಇಲಾಖೆ ವತಿಯಿಂದ ಬಾಲ ಕಾರ್ಮಿಕ ಪುನರ್ವಸತಿ</u> ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದು, ಈ ಯೋಜನೆಯಡಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ

<table>
<tr>
<td></td>
<td></td>
<td>ಬಾಲಕಾರ್ಮಿಕ ಯೋಜನಾ ಸೊಸೈಟಿಗಳ ಮೂಲಕ ಜಾರಿಗೊಳಿಸಲಾಗುತ್ತಿದೆ. ಬಾಲಕಾರ್ಮಿಕ ಪುನರ್ವಸತಿ ಯೋಜನೆ ಮೂಲಕ ಕರ್ನಾಟಕ ರಾಜ್ಯದಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸಲಾಗುತ್ತಿದೆ.</td>
</tr>
<tr>
<td>ಆ)</td>
<td>ಸರ್ಕಾರವು ಯಾವ ಯಾವ ರೀತಿಯ ಕಾರ್ಮಿಕರನ್ನು ಗುರುತಿಸಿದೆ; ಚಿಕ್ಕಮಗಳೂರು ಜಿಲ್ಲೆಯಲ್ಲಿ ಇಂತಹ ಎಷ್ಟು ಕಾರ್ಮಿಕರನ್ನು ಗುರುತಿಸಿ ಅವರಿಗಾಗಿ ಸರ್ಕಾರವು ರೂಪಿಸಿರುವ ಯೋಜನೆಗಳನ್ನು ತಲುಪಿಸಲು ಅನುಸರಿಸುತ್ತಿರುವ ಕ್ರಮಗಳೇನು; (ವಿವರ ನೀಡುವುದು)</td>
<td>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-<br>ಚಿಕ್ಕಮಗಳೂರು ಜಿಲ್ಲೆಯಲ್ಲಿ ಒಟ್ಟು 70114 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಯಾಗಿ ನೋಂದಣಿಯಾಗಿರುತ್ತಾರೆ. ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳು, 2006ರ 39 ರಿಂದ 49 ರವರೆಗಿನ ನಿಯಮಗಳಲ್ಲಿ ನಿಗಧಿ ಪಡಿಸಿರುವ ಸೌಲಭ್ಯಗಳನ್ನು ಅರ್ಹ ಫಲಾನುಭವಿಗಳು ಪಡೆಯಲು ತಮ್ಮ ಅರ್ಜಿಗಳನ್ನು ನೋಂದಾಯಿತ ಕಛೇರಿಗಳಿಗೆ ಸೇವಾ ಸಿಂಧು ತಂತ್ರಾಂಶದ ಮೂಲಕ ಸಲ್ಲಿಸಿ ಮಂಡಳಿಯಿಂದ ವಿವಿಧ ಸಹಾಯಧನವನ್ನು ಪಡೆದುಕೊಳ್ಳಬಹುದು.<br><br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-<br>ಕರ್ನಾಟಕ ರಾಜ್ಯ ಸರ್ಕಾರವು ಅಸಂಘಟಿತ ವಲಯದ ಇತರೆ ವರ್ಗ (ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು) ಸೇರಿದಂತೆ ಒಟ್ಟು 43 ಅಸಂಘಟಿತ ಕಾರ್ಮಿಕ ವರ್ಗಗಳನ್ನು ಗುರುತಿಸಿದ್ದು, ವಿವರವನ್ನು ಅನುಬಂಧ-3 ರಲ್ಲಿ ಸಲ್ಲಿಸಿದೆ.<br><br>ಮಂಡಳಿಯು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ವಿವರ ಈ ಕೆಳಕಂಡಂತಿದೆ:
<table>
<tr><th>ಕ್ರ.ಸಂ.</th><th>ಯೋಜನೆ ಹೆಸರು</th><th>ಕಾರ್ಮಿಕರ ಸಂಖ್ಯೆ</th></tr>
<tr><td>1</td><td>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ</td><td>3869</td></tr>
<tr><td>2</td><td>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ</td><td>10711</td></tr>
<tr><td>3</td><td>ಕೋವಿಡ್-19ರ ಮೊದಲನೇ ಅಲೆಯ ವಿಶೇಷ ಪ್ಯಾಕೇಜ್ ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರು</td><td>1492</td></tr>
<tr><td>4</td><td>ಕೋವಿಡ್-19ರ ಎರಡನೇ ಅಲೆಯ ವಿಶೇಷ ಪ್ಯಾಕೇಜ್ ಕೋರಿ ಅರ್ಜಿ ಸಲ್ಲಿಸಿದ ಕಾರ್ಮಿಕರು</td><td>20418</td></tr>
</table>
</td>
</tr>
</table>

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳ ಬಗ್ಗೆ ಕಾರ್ಮಿಕರಲ್ಲಿ ಅರಿವು ಮೂಡಿಸುವ ಸಲುವಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ;

- ಕರಪತ್ರ, ದಿನ ಪತ್ರಿಕೆ, ಬ್ಯಾನರ್ಸ್, ಹಾಗೂ ಹೋರ್ಡಿಂಗ್ಸ್‌ಗಳ ಮೂಲಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.
- ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಜಿಲ್ಲಾಮಟ್ಟದಲ್ಲಿ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ.
- ಕಾರ್ಮಿಕ ಸಹಾಯವಾಣಿ 155214 ಮೂಲಕ ಯೋಜನೆಗಳ ಬಗ್ಗೆ ಮಾಹಿತಿಯನ್ನು ನೀಡಲಾಗುತ್ತಿದೆ.
- ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲಾಗಿದ್ದು, ಸದರಿ ಕೇಂದ್ರಗಳ ಮೂಲಕ ಕಾರ್ಮಿಕರಿಗೆ ಸೇವಾ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.

ಯೋಜನೆಗಳ ಕುರಿತಂತೆ ಕರ್ನಾಟಕ ಕಾನೂನು ಸೇವಾ ಪ್ರಾಧಿಕಾರದ ಸಹಯೋಗದೊಂದಿಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ.

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-

ಕಾರ್ಮಿಕ ಇಲಾಖೆಯ ಅಧೀನದಲ್ಲಿರುವ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ವರ್ಷಕ್ಕೆ ಒಂದು ಬಾರಿ 20:40ರ ಅನುಪಾತದಲ್ಲಿ ವಂತಿಗೆ ಪಾವತಿ ಮಾಡುವ ವಿವಿಧ ಕಾರ್ಖಾನೆಗಳು/ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರನ್ನು ಗುರುತಿಸಿದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಒಟ್ಟು 12611 ಸಂಘಟಿತ ಕಾರ್ಮಿಕರು ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ವ್ಯಾಪ್ತಿಗೆ ಒಳಪಡುತ್ತಾರೆ.

ಸಂಘಟಿತ ಕಾರ್ಮಿಕರಿಗೆ ವಿವಿಧ ಯೋಜನೆಗಳ ಮಾಹಿತಿಯನ್ನು ತಲುಪುವಂತೆ ಮಾಡಲು ಹಾಗೂ ಫಲಾನುಭವಿಗಳು ಯೋಜನೆಗಳ ಸೌಲಭ್ಯಗಳನ್ನು ಸರಳ ರೀತಿಯಲ್ಲಿ ಪಡೆಯುವಂತಾಗಲು ಪತ್ರಿಕಾ ಪ್ರಕಟಣೆ, ಕರಪತ್ರಗಳ ವಿತರಣೆ, ಯೋಜನಾ ಸೌಲಭ್ಯಗಳ ಬ್ಯಾನರ್ ಪ್ರದರ್ಶನ ಹಾಗೂ ಆನ್‌ಲೈನ್ ವ್ಯವಸ್ಥೆಯನ್ನು ಮಂಡಳಿಯಿಂದ ರೂಪಿಸಲಾಗಿದೆ.

| | | |
|---|---|---|
| ಇ) | ಕಳೆದ 3 ವರ್ಷಗಳಲ್ಲಿ ಸರ್ಕಾರದಿಂದ ಚಿಕ್ಕಮಗಳೂರು ಜಿಲ್ಲೆಯಕಾರ್ಮಿಕ ಇಲಾಖೆಗೆ ಬಿಡುಗಡೆಯಾದ ಅನುದಾನವೆಷ್ಟು; ಈ ಅನುದಾನವನ್ನು ಯಾವ ಯಾವ ಉದ್ದೇಶಗಳಿಗಾಗಿ ಖರ್ಚು ಮಾಡಲಾಗಿದೆ; (ವಿವರ ನೀಡುವುದು) | ಮಂಡಳಿಯಿಂದ ಚಿಕ್ಕಮಗಳೂರು ಜಿಲ್ಲೆಗೆ ಪ್ರತ್ಯೇಕವಾಗಿ ಯಾವುದೇ ಅನುದಾನವನ್ನು ಬಿಡುಗಡೆ ಮಾಡಿರುವುದಿಲ್ಲ. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಕಟ್ಟಡ ಕಾಮಗಾರಿಗಳಿಂದ ಸ್ವೀಕೃತವಾದ ಶೇ.1ರಷ್ಟು ಸುಂಕ ಮೊತ್ತದಿಂದ ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ ಅರ್ಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳಡಿ ವಿತ್ತರಿಸಿರುವ ಸಹಾಯಧನದ ವಿವರವನ್ನು **ಅನುಬಂಧ-4** ರಲ್ಲಿ ಸಲ್ಲಿಸಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗೆ** ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸುವ ಉದ್ದೇಶದಿಂದ ಜಾರಿಗೊಳಿಸುತ್ತಿರುವ ಯೋಜನೆಗಳಡಿ ಜಿಲ್ಲಾವಾರು ಅನುದಾನ ಹಂಚಿಕೆಯಾಗಿರುವುದಿಲ್ಲ. ಆದರೆ, ಚಿಕ್ಕಮಗಳೂರು ಜಿಲ್ಲೆಯು ಸೇರಿದಂತೆ ಯೋಜನೆವಾರು ಬಿಡುಗಡೆಯಾದ ಅನುದಾನದ ವಿವರ ಕೆಳಗಿನಂತಿದೆ:<br><br>(ರೂ. ಲಕ್ಷಗಳಲ್ಲಿ)<br><br><table><tr><th rowspan="2">ಯೋಜನೆ</th><th colspan="3">ಬಿಡುಗಡೆಯಾದ ಅನುದಾನ</th></tr><tr><th>2018-19</th><th>2019-20</th><th>2020-21</th></tr><tr><td>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ</td><td>2216.90</td><td>1034.50</td><td>1801.00</td></tr><tr><td>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ</td><td>1312.50</td><td>499.50</td><td>1.00</td></tr><tr><td>ಆಶಾದೀಪ ಯೋಜನೆ:</td><td>324.75</td><td>433.00</td><td>1.00</td></tr></table><br>ಮೇಲ್ಕಂಡ ಕೋಷ್ಟಕದಲ್ಲಿ ತಿಳಿಸಿರುವ ಯೋಜನೆಗಳಡಿ ಬಿಡುಗಡೆಯಾದ ಅನುದಾನವನ್ನು ಈ ಕೆಳಕಂಡ ಯೋಜನೆಗಳ ಜಾರಿಗಾಗಿ ಬಳಸಿಕೊಳ್ಳಲಾಗಿದೆ.<br><br>1. **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:** ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ **3869** ಕಾರ್ಮಿಕರನ್ನು ನೋಂದಾಯಿಸಲಾಗಿದೆ. |

**2. ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:**

**ಅ) ಅಪಘಾತ ಪರಿಹಾರ ಸೌಲಭ್ಯ:** ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ 15 ಚಾಲಕರಿಗೆ/ನಾಮನಿರ್ದೇಶಿತರಿಗೆ ರೂ. 43.54 ಲಕ್ಷಗಳ ಅಪಘಾತ ಪರಿಹಾರವನ್ನು ವಿತರಿಸಲಾಗಿದೆ.

**ಆ) ಶೈಕ್ಷಣಿಕ ಧನ ಸಹಾಯ:** ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ 9 ಮಕ್ಕಳಿಗೆ ರೂ. 90,000/-ಗಳ ಧನ ಸಹಾಯವನ್ನು ಪಾವತಿಸಲಾಗಿದೆ.

**3. ಆಶಾದೀಪ ಯೋಜನೆ:** ಕಳೆದ ಮೂರು ವರ್ಷಗಳಲ್ಲಿ ಚಿಕ್ಕಮಗಳೂರು ಜಿಲ್ಲೆಗೆ ಸಂಬಂಧಿಸಿದಂತೆ, 22 ಅಭ್ಯರ್ಥಿಗಳಿಗೆ ಮಾಲೀಕರು ಪಾವತಿಸಿದ ರೂ.3,62,632/- ಗಳ ಇಎಸ್‌ಐ ಮತ್ತು ಇ.ಪಿ.ಎಫ್ ವಂತಿಕೆಯನ್ನು ಮಾಲೀಕರಿಗೆ ಮರುಪಾವತಿಸಲಾಗಿದೆ.

ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಸರ್ಕಾರದಿಂದ ಪ್ರತ್ಯೇಕವಾಗಿ ಚಿಕ್ಕಮಗಳೂರು ಜಿಲ್ಲೆಗೆ ಅನುದಾನ ಬಿಡುಗಡೆಯಾಗಿರುವುದಿಲ್ಲ. ಆದರೆ ಸಂಘಟಿತ ಕಾರ್ಮಿಕರ ಶ್ರೇಯಾಭಿವೃದ್ಧಿಗಾಗಿ ಸರ್ಕಾರದಿಂದ ಅಂಶದಾನ ಬಿಡುಗಡೆಯಾಗಿರುತ್ತದೆ. ವಿವರ ಈ ಕೆಳಕಂಡಂತಿದೆ.

| ವರ್ಷ | ಅಂಶದಾನ |
|---|---|
| 2018-19 | 500-00 ಲಕ್ಷಗಳು |
| 2019-20 | 718-00 ಲಕ್ಷಗಳು |
| 2020-21 | 600-00 ಲಕ್ಷಗಳು |

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-**

ಈ ಮಂಡಳಿಯಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅಂಶದಾನವನ್ನು ಕಾರ್ಮಿಕ ಕಲ್ಯಾಣ ಯೋಜನೆಗಳಿಗಾಗಿ ಖರ್ಚು ಮಾಡಲಾಗಿದೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ 541 ಫಲಾನುಭವಿಗಳಿಗೆ ಒಟ್ಟು ರೂ. 23,06,000/- ಗಳನ್ನು ಖರ್ಚು ಮಾಡಲಾಗಿದೆ. ಯೋಜನಾವಾರು ವಿವರಗಳು ಈ ಕೆಳಕಂಡಂತಿದೆ.

| ವರ್ಷ | ಯೋಜನೆ | ಫಲಾನುಭವಿಗಳು | ಮೊತ್ತ |
| --- | --- | --- | --- |
| 2018–19 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 250 | 1075000 |
| | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ | 3 | 15000 |
| 2019–20 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 242 | 1003000 |
| | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ | – | – |
| 2020–21 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 43 | 198000 |
| | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ | 3 | 15000 |
| | ಒಟ್ಟು | 241 | 2306000 |

ಕಾಇ 418 ಎಲ್‌ಇಟಿ 2021

(ಅರಬೈಲ್ ಶಿವರಾಮ ಹೆಬ್ಬಾರ್)
ಕಾರ್ಮಿಕ ಸಚಿವರು

## ಅನುಬಂಧ-1

### ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯಅವಲಂಭಿತರಿಗೆ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆರೂ. 30,000/- ಮತ್ತುಗಂಡು ಮಗುವಿನ ಜನನಕ್ಕೆರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆವೆಚ್ಚ :ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ(ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |

| | | |
|---|---|---|
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ<br>2 ವರ್ಷಅವಧಿಗೆ ಒಳಪಟ್ಟು |
| ತಾಂತ್ರೀಕ/ ವೈದ್ಯಕೀಯಎಸ್ಇಇಟಿಅಥವಾ ಕೆಸಿಇಟಿ | | |
| 12 | ಬಿಇ / ಬಿ.ಟೆಕ್ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ<br>ಕೋರ್ಸ್‌ನಗರಿಷ್ಠ<br>2 ವರ್ಷಅವಧಿಗೆ ಒಳಪಟ್ಟು<br>ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್) | ಸದರಿ<br>ಕೋರ್ಸ್‌ನಗರಿಷ್ಠ<br>ಅವಧಿಗೆ ಒಳಪಟ್ಟು<br>ವಾರ್ಷಿಕರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್ಎಮ್‌ಎಸ್ ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತ ಕ್ಕೊತ್ತರ ಕೋರ್ಸ್ | ರೂ.60,000<br>(ಸದರಿ<br>ಕೋರ್ಸ್‌ನಗರಿಷ್ಠ<br>ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ<br>ಕೋರ್ಸ್‌ನಗರಿಷ್ಠ<br>ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ/ ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗಗರಿಷ್ಠ<br>ಮೂರು ವರ್ಷಗಳಿಗೆ ಹಾಗೂ<br>ಎಮ್‌ಫಿಲ್‌ಗೆ 1 ವರ್ಷಕ್ಕೆ<br>ಪ್ರತಿ ವರ್ಷ<br>ರೂ. 25,000 (ಯೂಜಿಸಿಯ<br>ಜೂನಿಯರ್‌ರಿಸರ್ಚ್ ಫೆಲೋಶಿಫ್‌ಗೆ<br>ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ<br>ಮತ್ತು<br>ರಾಜ್ಯ ಸರ್ಕಾರದಲ್ಲಿ ಕೆಲಸ<br>ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ<br>ಯೂಜಿಸಿ ನಿಯಮಗಳನ್ವಯ ವೇತನ<br>ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ<br>ಅನುದಾನಿತ<br>ಕಾಲೇಜುಗಳಲ್ಲಿ ಕೆಲಸ<br>ನಿರ್ವಹಿಸುತ್ತಿರುವ ಅಭ್ಯರ್ಥಿಗಳು<br>ಈ ಸೌಲಭ್ಯವನ್ನು ಪಡೆಯಲು<br>ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್ಐಟಿ/ ಐಐಎಸ್ಇಆರ್/ ಎಐಐಎಮ್‌ಎಸ್ /ಎನ್ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋಧನಾ ಶುಲ್ಕ |

12. ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಭಿತರಿಗೆರೂ.300/- ರಿಂದರೂ.10,000/-ವರೆಗೆ.

13. ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿರೂ.5,00,000/-, ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ ರೂ.2,00,000/- ಮತ್ತುಭಾಗಶಃ ಶಾಶ್ವತದುರ್ಬಲತೆಯಾದಲ್ಲಿ ರೂ.1,00,000/-

14. ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ): ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದತೊಂದರೆಗೆ ಸಂಬಂಧಿತಚಿಕಿತ್ಸೆ, ಮೂತ್ರ ಪಿಂಡದಲ್ಲಿನಕಲ್ಲುತೆಗೆಯುವಚಿಕಿತ್ಸೆ, ಮೆದುಳಿನ ರಕ್ತಸ್ರಾವದಚಿಕಿತ್ಸೆ, ಅಲ್ಸರ್‌ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೋಕೇಶನ್‌ಚಿಕಿತ್ಸೆ, ಇತರೆಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/-ವರೆಗೆ

15. ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್): ಫಲಾನುಭವಿ ಅಥವಾಅವರಇಬ್ಬರು ಮಕ್ಕಳ ಮದುವೆಗೆತಲಾ ರೂ.50,000/-

16. ಐಕಲು ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ): ಅನಿಲ ಸಂಪರ್ಕದೊಂದಿಗೆಎರಡು ಬರ್ನರ್ ಸ್ಟೌವ್

17. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತಕಟ್ಟಡಕಾರ್ಮಿಕರಿಗೆ

18. ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ: ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿತೊಡಗಿರುವ ನೋಂದಾಯಿತಕಾರ್ಮಿಕರಇಬ್ಬರು ಮಕ್ಕಳಿಗೆ ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)

19. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಟಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕರೂ.6,000/- ಗಳ ಸಹಾಯಧನ.

# ಅನುಬಂಧ-2

:ಕಾರ್ಮಿಕ ಕಲ್ಯಾಣ ಯೋಜನೆಗಳ ವಿವರ:

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕರ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ನೆರವು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ಒಂದು ನಿಧಿಯನ್ನು, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965ರ ಅಡಿಯಲ್ಲಿ ಸ್ಥಾಪಿಸಲಾಗಿದೆ. ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಕ್ಷೇತ್ರಗಳಾದ ಕಾರ್ಖಾನೆಗಳು/ಸಂಸ್ಥೆಗಳು/ಪ್ಲಾಂಟೇಶನ್/ಸಾರಿಗೆ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರ ಕ್ಷೇಮಾಭಿವೃದ್ಧಿಗಾಗಿ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಈ ಕೆಳಗಿನ ಯೋಜನೆಗಳು ಜಾರಿಯಲ್ಲಿರುತ್ತದೆ.

ಸೂಚನೆ :

1. ಯೋಜನೆಯ ಸೌಲಭ್ಯ ಪಡೆಯಲು ಪ್ರತಿ ವರ್ಷ ಜನವರಿ 15 ರೊಳಗೆ ಕಾರ್ಮಿಕರು, ಮಾಲೀಕರು ರೂ. 20 : 40 ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಒಟ್ಟು ರೂ. 60/- ಗಳಂತೆ ವಂತಿಕೆಯನ್ನು ಕಾರ್ಮಿಕ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು.
2. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಅನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ.

ವಂತಿಕೆ ಪಾವತಿ ಮಾಡುವ ಸಂಸ್ಥೆಗಳು ಹಾಗೂ ಕಾರ್ಖಾನೆಗಳು www.klwb.karnataka.gov.in ಇಲ್ಲಿ ತಮ್ಮ ಸಂಸ್ಥೆಗಳನ್ನು ನೊಂದಾಯಿಸಿ ವಂತಿಕೆ ಪಾವತಿ ಮಾಡಬೇಕಾಗಿರುತ್ತದೆ.

ಈ ಕೆಳಗಿನ ಯೋಜನೆಗಳಿಗೆ ಮಾಸಿಕ ವೇತನ ರೂ. 21,000/- ಗಿಂತ ಮೀರಿರಬಾರದು. ವಯೋಮಿತಿ 18- 60

ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ: ಪ್ರೌಢ ಶಾಲೆ, (8 ರಿಂದ 10ನೇ ತರಗತಿವರೆಗೆ) ರೂ.3,000/ ಪಿಯುಸಿ/ಡಿಪ್ಲೊಮಾ/ಐಟಿಐ/ಟಿಸಿಹೆಚ್ ಶಿಕ್ಷಣಕ್ಕಾಗಿ ರೂ.4,000/-ಪದವಿ ಶಿಕ್ಷಣಕ್ಕಾಗಿ ರೂ.5,000/ ಸ್ನಾತಕೋತ್ತರ ಶಿಕ್ಷಣಕ್ಕಾಗಿ ರೂ.6,000/-ಇಂಜಿನೀಯರಿಂಗ್/ವೈದ್ಯಕೀಯ ಶಿಕ್ಷಣಕ್ಕಾಗಿ ರೂ.10,000/-ಗಳ ಪ್ರೋತ್ಸಾಹ ಧನ ನೀಡಲಾಗುವುದು.(ಅರ್ಜಿ ಸಲ್ಲಿಸಲು ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ.50 ಹಾಗೂ ಪ.ಜಾ / ಪ.ಪಂಗಡದ ವಿದ್ಯಾರ್ಥಿಗಳು ಶೇ. 45 ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು. ಒಂದು ಕುಟುಂಬದಲ್ಲಿ ಒಬ್ಬ ವಿದ್ಯಾರ್ಥಿಗೆ ಮಾತ್ರ ಈ ಸೌಲಭ್ಯ ನೀಡಲಾಗುವುದು)

2. ಕಾರ್ಮಿಕರಿಗೆ ವೈದ್ಯಕೀಯ ನೆರವು : ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಕ್ಯಾನ್ಸರ್, ಆಂಜಿಯೋಪ್ಲಾಸ್ಟಿ, ಕಣ್ಣು, ಅರ್ಥೋಪೆಡಿಕ್, ಗರ್ಭಕೋಶದ ಶಸ್ತ್ರ ಚಿಕಿತ್ಸೆ, ಗಾಲ್ ಬ್ಲಾಡರ್ ತೊಂದರೆ, ಮೆದುಳಿನ ರಕ್ತಸ್ರಾವ ಚಿಕಿತ್ಸೆಗೆ ಕನಿಷ್ಠ ರೂ. 1,000/-ದಿಂದ ಗರಿಷ್ಠ ರೂ.25,000/-ವರೆಗೆ ಮತ್ತು ಆರೋಗ್ಯ ತಪಾಸಣೆಗೆ ರೂ. 500/-ರಿಂದ ರೂ, 1000/-ವರೆಗೆ ಧನ ಸಹಾಯ ನೀಡಲಾಗುವುದು.

3. ಕಾರ್ಮಿಕರಿಗೆ ಅಪಘಾತ ಧನ ಸಹಾಯ : ಕಾರ್ಮಿಕರಿಗೆ ಕೆಲಸದ ವೇಳೆಯಲ್ಲಿ ಅಪಘಾತವಾದಲ್ಲಿ ಕನಿಷ್ಠ ರೂ. 1,000/- ಗರಿಷ್ಠ ರೂ. 10,000/- ವರೆಗೆ ಧನ ಸಹಾಯ ನೀಡಲಾಗುವುದು. ಸೌಲಭ್ಯ ಪಡೆಯುವ ಕಾರ್ಮಿಕರು ಅಪಘಾತವಾದ ಮೂರು ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

4. ಹೆರಿಗೆ ಭತ್ಯೆ ಸೌಲಭ್ಯ : ಮಹಿಳಾ ಕಾರ್ಮಿಕರಿಗೆ ಮೊದಲ 2 ಮಕ್ಕಳಿಗೆ ಮಾತ್ರ ಹೆರಿಗೆ ಭತ್ಯೆ ಸೌಲಭ್ಯವನ್ನು ತಲಾ ರೂ. 10,000/-

ಧನ ಸಹಾಯ ನೀಡಲಾಗುವುದು. ಮಗು ಜನಿಸಿದ 6 ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

ಈ ಕೆಳಗಿನ ಯೋಜನೆಗಳಿಗೆ ಮಾಸಿಕ ಸಂಬಳದ ಮಿತಿಯಿರುವುದಿಲ್ಲ. ವಯೋಮಿತಿ 18-

5. ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ :ಈ ಯೋಜನೆಯ ಸೌಲಭ್ಯ ಪಡೆಯಲು ಮೃತರ ಕುಟುಂಬದ ಅವಲಂಬಿತರು

ಕಾರ್ಮಿಕ ಮೃತಪಟ್ಟ ಆರು ತಿಂಗಳೊಳಗೆ ನಿಗದಿತ ಅರ್ಜಿ ನಮೂನೆಯಲ್ಲಿ ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿದಲ್ಲಿ, ರೂ. 10,000/- ಧನ ಸಹಾಯ ನೀಡಲಾಗುವುದು.

6. ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ : ನೋಂದಾಯಿತ ಕಾರ್ಮಿಕ ಸಂಘಟನೆಗಳು/ಸರ್ಕಾರೇತರ ಸಂಸ್ಥೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ಹಮ್ಮಿಕೊಳ್ಳುವ ವಾರ್ಷಿಕ ಆರೋಗ್ಯ ತಪಾಸಣೆ ಶಿಬಿರಕ್ಕೆ ರೂ. 1,00,000/- ಧನ ಸಹಾಯ ನೀಡಲಾಗುವುದು.

7. ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ : ನೋಂದಾಯಿತ ಕಾರ್ಮಿಕ ಸಂಘಟನೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ವಾರ್ಷಿಕ ಕ್ರೀಡಾ, ಕೂಟ ಹಮ್ಮಿಕೊಂಡಲ್ಲಿ ರೂ. 1,00,000/- ಧನ ಸಹಾಯ ನೀಡಲಾಗುವುದು.

ಧನ ಸಹಾಯವನ್ನು ಫಲಾನುಭವಿಗಳ ಉಳಿತಾಯ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ಜಮಾ ಮಾಡಲಾಗುವುದು.

## ಅನುಬಂಧ-3

### ಸರ್ಕಾರ ಗುರುತಿಸಿರುವ 43 ಅಸಂಘಟಿತ ವರ್ಗದ ಕಾರ್ಮಿಕರ ಪಟ್ಟಿ

1. ದರ್ಜಿಗಳು
2. ದೋಬಿಗಳು
3. ಹಮಾಲಿಗಳು
4. ಹೋಟೆಲ್ ಕಾರ್ಮಿಕರು
5. ಆಟೋ ಮತ್ತು ಟ್ಯಾಕ್ಸಿ ಚಾಲಕರು ಹಾಗೂ ಖಾಸಗಿ ಬಸ್, ಲಾರಿ ಚಾಲಕರು ಹಾಗೂ ನಿರ್ವಾಹಕರು
6. ಆಟೋಮೊಬೈಲ್ ವರ್ಕ್‌ಶಾಪ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು ಮತ್ತು
7. ಗೃಹ ಕಾರ್ಮಿಕರು
8. ಕೃಷಿ/ತೋಟಗಾರಿಕೆ/ಹೈನುಗಾರಿಕೆ ಕೆಲಸಗಳಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
9. ನಾರಿನ ಉದ್ದಿಮೆಯಲ್ಲಿ ತೊಡಗಿರುವ ಕೂಲಿ ಕಾರ್ಮಿಕರು
10. ಮನೆಗಳಲ್ಲಿ ನೇಯ್ಗೆ ಕೆಲಸ ಮಾಡುವ ನೇಕಾರರು
11. ಮೀನುಗಾರರು
12. ಕುಂಬಾರರು
13. ಚಮ್ಮಾರರು
14. ಕ್ಷೌರಿಕರು
15. ಕಸಾಯಿ ಖಾನೆ ಕಾರ್ಮಿಕರು
16. ಕಮ್ಮಾರರು
17. ಚಿನಿವಾರರು/ಅಕ್ಕಸಾಲಿಗರು
18. ಮನೆಗಳಲ್ಲಿ ಬೀಡಿ ಕಟ್ಟುವವರು
19. ಮನೆಗಳಲ್ಲಿ ಅಗರಬತ್ತಿ ತಯಾರಿಸುವ ಕಾರ್ಮಿಕರು
20. ಶಿಲ್ಪಕಾರರು/ ಹಸ್ತ ಕುಶಲ ಕಾರ್ಮಿಕರು
21. ಚಿತ್ರ ಬಿಡಿಸುವವರು
22. ಬಿದಿರಿನ ವಸ್ತುಗಳನ್ನು ತಯಾರು ಮಾಡುವವರು
23. ಖಾದ್ಯ ತೈಲ/ಮನೆಯಲ್ಲಿ ಆಹಾರ ವಸ್ತುಗಳ ಸಂಸ್ಕರಣೆ ಕೆಲಸದಲ್ಲಿ ತೊಡಗಿರುವವರು.
24. ಟಿಂಬರ್ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
25. ರೇಷ್ಮೆ ಕಾರ್ಮಿಕರು
26. ಕಾಟನ್ ಜಿನ್ನಿಂಗ್ ಮತ್ತು ಪ್ರೊಸೆಸಿಂಗ್ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
27. ಮುದ್ರಣ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
28. ಕಲ್ಲು ಒಡೆಯುವ ಕಾರ್ಮಿಕರು
29. ಚರ್ಮ ಹದ ಮಾಡುವ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
30. ಎಲ್ಲಾ ವಿಧದ ಮಿಲ್‌ಗಳಲ್ಲಿ ಕೆಲಸ ಮಾಡುವ ಕಾರ್ಮಿಕರು
31. ಬೀದಿ ಬದಿಯ ಮಾರಾಟಗಾರರು
32. ಚಾಲಕರು/ನಿರ್ವಾಹಕರು/ಸಹಾಯಕರು/ ಕ್ಲೀನರ್‌ಗಳು/ ಗಾಡಿ ಎಳೆಯುವವರು/ ರಿಕ್ಷಾ ವಾಲಾಗಳು/ ಟಾಂಗಾವಾಲಾಗಳು.
33. ಎಲ್ಲಾ ಬಗೆಯ ರಿಪೇರಿ ಕೆಲಸ ಮತ್ತು ತ್ಯಾಜ್ಯ ವಿಲೇವಾರಿ ಕೆಲಸದಲ್ಲಿ ತೊಡಗಿರುವ ಕಾರ್ಮಿಕರು
34. ಚಿಂದಿ ಆಯುವವರು

35. ಅಡಿಗೆ ಕೆಲಸಗಾರರು/ಕಲ್ಯಾಣ ಮಂಟಪಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವವರು/ಮಧ್ಯಾಹ್ನದ ಬಿಸಿ ಊಟದ ಕಾರ್ಮಿಕರು ಮತ್ತು ಸಹಾಯಕರು
36. ಸಫಾಯಿ ಕರ್ಮಚಾರಿಗಳು
37. ಕಛೇರಿಗಳಲ್ಲಿ ಶುಚಿ ಕೆಲಸದಲ್ಲಿ ತೊಡಗಿರುವ ಗುತ್ತಿಗೆ ಕಾರ್ಮಿಕರು
38. ಗುತ್ತಿಗೆ ಆಧಾರದ ಮೇಲೆ ನೇಮಕವಾಗಿರುವ ಭದ್ರತಾ ಸಿಬ್ಬಂದಿ/ವಾಚ್‌ಮನ್‌ಗಳು
39. ಪೋರ್ಟರ್
40. ಪ್ರವಾಸಿ ಗೈಡ್‌ಗಳು
41. ಮಂಡಕ್ಕಿ ಭಟ್ಟಿ ಕಾರ್ಮಿಕರು
42. ಛಾಯಾವೃತ್ತಿ ಕಾರ್ಮಿಕರು
43. ಇತರೆ ವರ್ಗ (ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2 (l) ರ ವ್ಯಾಖ್ಯಾನಕ್ಕೆ ಒಳಪಡುವ ಅಸಂಘಟಿತ ವರ್ಗದ ಎಲ್ಲಾ ಕಾರ್ಮಿಕರು)

# ಅನುಬಂಧ-4

## ಮಾನ್ಯ ವಿಧಾನಪರಿಷತ್‌ಸದಸ್ಯರಾದ ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1437 ಉತ್ತರಕ್ಕೆ ಅನುಬಂಧ-4

ಚಿಕ್ಕಮಗಳೂರು ಜಿಲ್ಲೆಯಲ್ಲಿಕರ್ನಾಟಕಕಟ್ಟಡ ಮತ್ತುಇತರೆ ನಿರ್ಮಾಣಕಾರ್ಮಿಕರಕಲ್ಯಾಣ ಮಂಡಳಿಯಿಂದ ಸೌಲಭ್ಯ (ಸಹಾಯಧನ) ನೀಡಿರುವ ವೃತ್ತವಾರು ವಿವರ

| ವರ್ಷ | ಶೈಕ್ಷಣಿಕ | | ಮದುವೆ | | ವೈದ್ಯಕೀಯ ವೆಚ್ಚ | | ಪ್ರಮುಖ ವೈದ್ಯಕೀಯ | | ಹೆರಿಗೆಧನ ಸಹಾಯ | | ಅಂತ್ಯ ಸಂಸ್ಕಾರ ಮತ್ತುಅನುಗ್ರಹ ರಾಶಿ | | ಅಪಘಾತ ಮರಣ/ಭಾಗಶಃ/ ಶಾಶ್ವತದುರ್ಬಲತೆ | | ಪಿಂಚಣಿ | |
|---|---|---|---|---|---|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 2019-20 | 4426 | 34300000 | 680 | 34000000 | 1 | 2000 | 18 | 416871 | 144 | 3645000 | 113 | 6102000 | 1 | 500000 | 0 | 0. |

| ವರ್ಷ | ಶೈಕ್ಷಣಿಕ | | ಮದುವೆ | | ವೈದ್ಯಕೀಯ ವೆಚ್ಚ | | ಪ್ರಮುಖ ವೈದ್ಯಕೀಯ | | ಹೆರಿಗೆದನಸಹಾಯ | | ತಾಯಿ ಮಗು ಸಹಾಯ ಹಸ್ತ | | ಅಂತ್ಯ ಸಂಸ್ಕಾರ ಮತ್ತುಅನುಗ್ರಹ ರಾಶಿ | | ಅಪಘಾತ ಮರಣ/ಭಾಗಶಃ/ಶಾಶ್ವತ ದುರ್ಬಲತೆ | | ಪಿಂಚಣಿ | | ಶಾಶ್ವತದ ುರ್ಬಲತೆ ಪಿಂಚಣಿ | | ಕೋವಿಡ್-19 ಪರಿಹಾರ | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ (ರೂ. 5000) (ರೂ. 3000) |
| 2020-21 | 7966 | 83358460 | 720 | 36000000 | 17 | 29550 | 49 | 2258344 | 230 | 5800000 | 18 | 108000 | 81 | 4374000 | 4 | 1450000 | 234 | 464000 | 10 | 20000 | 38220 | 191100000 |
| 2021-22 | 1271 | 17919000 | 94 | 4700000 | 0 | 0 | 12 | 430363 | 60 | 1540000 | 0 | 0 | 23 | 1242000 | 0 | 0 | 205 | 410000 | 10 | 20000 | 45597 | 136761000 |